# 118

# ಮನುಷ್ಯ ಯಜ್ಞ

(ಒಂದು ಉಪನಿಷದ್ ಕಥೆ)




ಲೇಖಕರು:

ಶ್ರೀ ಬಿ. ಶಂಕರ ಭಟ್ಟ, ವಿದ್ವಾನ್,

ಮಂಗಳೂರು.



1956.






ಒಂದಾಣೆ ಮಾಲೆ

## ಒಂದಾಣೆ ಮಾಲೆಯ ಈ ವರೆಗಿನ ಪ್ರಕಟಣೆಗಳು:

೧*ಕೆಪ್ಪಟಿರಾಯ; ೨ ನಾರೀಶ್ವರರು(ದ್ವಿ. ಮುದ್ರಣ); ೩ ಕಳ್ಳನಿಗೆ ಸಂಭಾವನೆ(ದ್ವಿ.ಮುದ್ರಣ) ೪ *ಸದ್ರಿಸುಬ್ಬ: ೫ ಅದ್ಭುತ ತ್ಯಾಗ (ದ್ವಿ. ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾವಣೆ; ೭*ಬೀಡಿ ಸೇದಬೇಡಿ ಮತ್ತು ಆ ಮಗು; ೮* ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ ಶ್ರೀ ಕ್ಷೇತ್ರ ಧರ್ಮಸ್ಥಳ (ಚ. ಮುದ್ರಣ); ೧೨ ಜೀವದ ಮೌಲ್ಯ (ದ್ವಿ. ಮುದ್ರಣ); ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ.ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ. ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ ಜಗಳಗಂಟಿ( ದ್ವಿ, ಮುದ್ರಣ); ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I(ದ್ವಿ.ಮುದ್ರಣ); ೨೨ ತಿರುಕ್ಕುರಲ್ (ದ್ವಿ.ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ-II (ದ್ವಿ.ಮು); ೨೫ ಧೈರ್ಯ ಮತ್ತು ಇತರ ಸತ್ಯಕಥೆಗಳು; ೨೬ ಮಾರಾವತಾರ(ದ್ವಿ. ಮು); ೨೭ ಹಾಸವಿಲಾಸ(ದ್ವಿ.ಮು.); ೨೮ ಸತ್ಯವಂತ ಬಾಬಿ [ದ್ವಿ.ಮು.]; ೨೯ ಜಾಣ್ಮೆಯ ಒಗಟು (ದ್ವಿ.ಮು); ೩೦ ಜಾತಕ ಕಥೆಗಳು(ದ್ವಿ. ಮು.); ೩೧ ಕಾರ್ಕಳದ ಚರಿತ್ರೆ; ೩೨ ಮರ್ಜಿ; ೩೩ ದರ್ಶನದ ಕಥೆಗಳು; ೩೪ ಅಳುವಿನಹೊಳೆ ಮತ್ತು ಕೇಶವಭೂಪ; ೩೫ ಶರಾಬಿನಪೀಪಾಯಿಗಳು; ೩೬ ಉಪದೇಶ ಶತಕ; ೩೭* ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ. ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು(ದ್ವಿ.ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ (ದ್ವಿ.ಮು.) ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾ ಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ; ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟ ಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯಮ್; ೬೪ ಲೌಕಿಕ ನ್ಯಾಯಗಳು; ೬೫* ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ. ಮುದ್ರಣ); ೬೮ ಕರುಣೆ ಮತ್ತು ಇತರ ಕಥೆಗಳು; ೬೯* ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧. ಆದಿಶ್ರೀ ಶಂಕರಾಚಾರ್ಯರ ಜೀವನಚರಿತ್ರೆ (ದ್ವಿ. ಮು.) ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ದ್ವಿ. ಮು.) ೮೩ ಬೆಡಗಿನ ನಾಡು ಕೊಡಗು; ೮೪ ಆಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ

[ಪುಟ 13ಕ್ಕೆ ಮುಂದುವರಿದಿದೆ]

# ಮನುಷ್ಯಯಜ್ಞ

ಸಾವಿರಾರು ವರ್ಷಗಳ ಹಿಂದೆ ನಡೆದ ಕತೆ. ಆಗಲೂ ನಮ್ಮ ಹಿರಿಯರಲ್ಲಿ ಹಲವರು ವಿದ್ವಾಂಸರಿದ್ದರು. ಅವರು ಉತ್ತರ ಭಾರತದ ಹಿಮಾಲಯದ ತಪ್ಪಲುಗಳಲ್ಲಿ, ಗಂಗಾ-ಯಮುನಾ ನದಿಗಳ ತೀರದಲ್ಲಿ ವಾಸಮಾಡುತ್ತಿದ್ದರು. ಆಗಿನ ಕಾಲದಲ್ಲಿ ಅವರು ತಮ್ಮ ಜೀವನವನ್ನು ಸುಗಮವಾಗಿ ಸಾಗಿಸಲಿಕ್ಕಾಗಿ ಪ್ರಕೃತಿಯೊಡನೆ ಹೋರಾಡಬೇಕಿತ್ತು. ಈಗಿನಂತೆ ಆಗ ವಿಜ್ಞಾನದ ಸಹಾಯವಿರಲಿಲ್ಲ. ಆದರೂ ಅವರು ಕೈಕಟ್ಟಿ ಸುಮ್ಮಗೆ ಕುಳಿತುಕೊಳ್ಳಲಿಲ್ಲ. ಜೀವನಕ್ಕಾಗಿ ಹೋರಾಟ ನಡೆಸಿದರು. ಸುಲಭ ದಾರಿಯನ್ನು ಹುಡುಕಲಿಕ್ಕಾಗಿ ಬುದ್ಧಿಯನ್ನು ಉಪಯೋಗಿಸಿದರು; ತಾವು ಪ್ರಕೃತಿಯಲ್ಲಿ ಕಂಡ ಸೂರ್ಯ, ಚಂದ್ರ, ಮೋಡ, ಮಳೆ, ಗುಡುಗು, ಮಿಂಚುಗಳನ್ನು ಕ್ರೂರಮೃಗಗಳಿಂದ ಕೂಡಿದ ಕಾಡುಗಳನ್ನು, ಕಲಕಲ ನಾದದಿಂದ, ಭೋರ್ ಭೋರ್ ಎಂಬ ಶಬ್ದದಿಂದ ಹರಿಯುವ ನದಿಗಳನ್ನು ಕಂಡು ಅವುಗಳ ವಿಷಯವನ್ನು ವರ್ಣಿಸಿ ಪದ್ಯಕಟ್ಟಿ ಹಾಡಿದರು. ಸೂರ್ಯ, ಚಂದ್ರ, ಆಕಾಶ ಮೊದಲಾದುವು ದೇವತೆಗಳೆಂದು ಭಾವಿಸಿ, ಅಲ್ಲಿಂದ ದೊರಕುವ ಬೆಳಕು, ಮಳೆಗಾಳಿಗಳಿಗಾಗಿ ಆ ದೇವತೆಗಳನ್ನು, ಅವುಗಳ ಶಕ್ತಿಯನ್ನು ಹೊಗಳಿದರು. ತಮ್ಮನ್ನು ಒಟ್ಟುಗೂಡಿಸಿ ತಮಗೆ ದಾರಿತೋರಿದ ಯಜಮಾನನನ್ನೂ ಅವರು ಮರೆಯಲಿಲ್ಲ. ಅವನೊಬ್ಬ ಮಹಾವೀರನೆಂದು ನೆನೆಸಿದರು. ಸುಖಸಂತೋಷದ ಕಾಲದಲ್ಲಿ, ಕಷ್ಟದುಃಖಗಳ ಸಮಯದಲ್ಲಿ ಒಂದಾಗಿ ಜೀವಿಸಿದರು. ಈ ವಿಚಾರವೆಲ್ಲ ವೇದಗಳಲ್ಲಿ ಬಂದಿದೆ.

ಆ ನಮ್ಮ ಹಿರಿಯರು ಅಷ್ಟಕ್ಕೆ ಕುಳಿತುಕೊಳ್ಳಲಿಲ್ಲ. ನಾವು ಹೇಗೆ ಹುಟ್ಟಿದೆವು? ನಮ್ಮನ್ನು ಯಾರು ಹುಟ್ಟಿಸಿದರು? ಈ ಸೃಷ್ಟಿಯ ರಹಸ್ಯವೇನು? ಎಂದೆಲ್ಲಾ ವಿಚಾರಿಸತೊಡಗಿದರು. ಇದು ತುಸು ಕಠಿಣವಾದ ವಿಚಾರ. ಇಂಥಾ ವಿಚಾರಕ್ಕೆ ಮನಸ್ಸಿನಲ್ಲಿ ಶಾಂತಿ ಇರಬೇಕು. ಅದಕ್ಕಾಗಿ ಅವರು ಮನೆಮಾರುಗಳನ್ನು ಬಿಟ್ಟು ದೂರದ ವನಗಳಲ್ಲಿ, ಪರ್ವತಗಳಲ್ಲಿ

ನದೀತೀರಗಳಲ್ಲಿ ಜನವಸತಿ ಕಡಿಮೆ ಇರುವಲ್ಲಿ ಆಶ್ರಮ ಕಟ್ಟಿ ವಾಸಿಸಿದರು. ಆಶ್ರಮಗಳಲ್ಲಿ ವಾಸಿಸುವ ಅವರನ್ನು ಋಷಿಗಳು, ಮುನಿಗಳು ಎಂದು ಕರೆದರು. ಆ ಋಷಿ, ಮುನಿಗಳು ತಮ್ಮ ಬುದ್ಧಿಶಕ್ತಿಯಿಂದ ಕಂಡುಕೊಂಡ ವಿಚಾರಗಳನ್ನೆಲ್ಲ ತಮ್ಮ ಶಿಷ್ಯರಿಗೆ ಹೇಳಿದರು; ಆ ವಿಚಾರಸಮೂಹಕ್ಕೆಲ್ಲ ಉಪನಿಷತ್ತುಗಳೆಂದು ಕರೆದರು. ಆ ಉಪನಿಷತ್ತುಗಳಲ್ಲಿ ಎಷ್ಟೋ ಕತೆಗಳು ಬಂದಿವೆ. ಕಠಿಣವಾದ ವಿಚಾರಗಳನ್ನು ತಿಳಿಸಲಿಕ್ಕೆ ಆ ಕತೆಗಳು ತುಂಬ ಪ್ರಯೋಜನಕಾರಿಗಳಾಗಿವೆ. ವಾಜಸೇನೆಯ ಸಂಹಿತಾ ಎಂಬ ಪುಸ್ತಕದಲ್ಲಿ ಬಂದ ಹರಿಶ್ಚಂದ್ರನ ಕತೆಯನ್ನು ಇಲ್ಲಿ ಕೊಟ್ಟಿದೆ. ಈ ಕತೆ, ನಮಗೆ ಸಾಮಾನ್ಯವಾಗಿ ಗೊತ್ತಿರುವಂತೆ ವಿಶ್ವಾಮಿತ್ರನು ಹರಿಶ್ಚಂದ್ರನನ್ನು ಪೀಡಿಸುವ ಕತೆಯಲ್ಲ. ಹರಿಶ್ಚಂದ್ರನಿಗೆ ವಿಶ್ವಾಮಿತ್ರನು ಉಪಕಾರ ಮಾಡುವ ಕತೆ.

ಪುರಾತನಕಾಲದಲ್ಲಿ ಕೋಸಲದೇಶದ ಸರಯೂ ನದೀತೀರದಲ್ಲಿ ಇಕ್ಷ್ವಾಕುವಂಶದ ತ್ರಿಶಂಕುಮಹಾರಾಜನು ಆಳುತಿದ್ದನು. ಈ ಮಹಾರಾಜನು ಹಲವಾರು ಯಜ್ಞಗಳನ್ನೂ ಯಾಗಗಳನ್ನೂ ಮಾಡಿ ಕೀರ್ತಿಗೊಂಡಿದ್ದನು. ಮಹಾರಾಜನಿಗೆ ಯಜ್ಞದಲ್ಲಿ ಸಹಾಯಮಾಡಲು ವಿಶ್ವಾಮಿತ್ರ ಮುನಿಯು ಸಿದ್ಧನಾಗಿದ್ದನು. ವಿಶ್ವಾಮಿತ್ರನು ತ್ರಿಶಂಕುಮಹಾರಾಜನಿಗಾಗಿ ಪ್ರತ್ಯೇಕ ಒಂದು ಸ್ವರ್ಗವನ್ನೇ ನಿರ್ಮಿಸಿದ್ದನು. ಆದುದರಿಂದ ಅವನ ಕೀರ್ತಿಯು ಭೂಲೋಕದಲ್ಲೆಲ್ಲ ಹರಡಿದ್ದಿತು. ಈ ಕೀರ್ತಿವಂತನಾದ ತ್ರಿಶಂಕುವಿನ ಮಗನೇ ಹರಿಶ್ಚಂದ್ರ ಮಹಾರಾಜನು.

ಹರಿಶ್ಚಂದ್ರರಾಜನ ಪ್ರಿಯಪತ್ನಿಯ ಹೆಸರು ಚಂದ್ರಮತೀದೇವಿ. ಮಹಾರಾಜನು ತನ್ನ ಪ್ರಜೆಗಳನ್ನು ಸ್ವಂತ ಮಕ್ಕಳಂತೆ ಪಾಲಿಸುತ್ತಿದ್ದರೂ ಅವನಿಗೆ ಸ್ವತಃ ಮಕ್ಕಳಿರಲಿಲ್ಲ. ಆದೊಂದು ಚಿಂತೆ ಅವನನ್ನು ಯಾವಾಗಲೂ ಬಾಧಿಸುತಿತ್ತು. ಹೀಗಿರಲು, ಒಮ್ಮೆ ನಾರದ ಮುನಿಯು ರಾಜನ ಆಸ್ಥಾನಕ್ಕೆ ಬಂದನು. ಅವನು ರಾಜನ ಚಿಂತೆಯ ಕಾರಣವನ್ನು ಕೇಳಿದನು. "ಮಹಾರಾಜ, ಪುತ್ರಸಂತಾನವಿಲ್ಲದ ನೀನು ಜಲಾಧಿಪತಿಯಾದ ವರುಣದೇವನನ್ನು ಪ್ರಾರ್ಥಿಸು. ಅವನು ಸಂತಾನಸಂಪತ್ತನ್ನು ಅನುಗ್ರಹಿಸುವನು. ಆದರೆ, ಅಂತಹ ಅನುಗ್ರಹ ತೋರಿಸಬೇಕಾದರೆ ಬೆಲೆಬಾಳುವ ಬಲಿಯನ್ನು ಕೇಳದಿರನು. ಆ ಬಲಿ ಮತ್ತೇನೂ ಅಲ್ಲದೆ ನಿನಗೆ ಹುಟ್ಟುವ ಆ ಪುತ್ರರತ್ನವನ್ನೇ ಬಲಿಯಾಗಿ ಬೇಡಬಹುದು. ಅಂತಹ ಕಠಿಣವಾದ

ತ್ಯಾಗಕ್ಕೆ ನೀನು ಸಿದ್ಧನಿರುವೆಯಾದರೆ, ವರುಣನನ್ನು ಪ್ರಾರ್ಥಿಸು. ವರುಣನೊಡನೆ ಸಂತಾನವನ್ನು ಬೇಡು" ಎಂದು ಸೂಚಿಸಿದನು.

ನಾರದನ ಸೂಚನೆ ಮಹಾರಾಜನಿಗೆ ಮನಸ್ಸಾಯಿತು. ಅದರಂತೆಯೇ ಹರಿಶ್ಚಂದ್ರನು ವರುಣದೇವನನ್ನು ಪ್ರಾರ್ಥಿಸಿದನು. ವರುಣದೇವನು ಮಹಾರಾಜನಿಗೆ ಪ್ರತ್ಯಕ್ಷನಾಗಿ ಬೇಕಾದುದನ್ನು ಬೇಡೆಂದು ಹೇಳಿದನು. ತನಗೆ ಪುತ್ರಸಂತಾನವಿಲ್ಲವೆಂದೂ, ಒಂದು ಉತ್ತಮವಾದ ಸಂತಾನವನ್ನು ದಯಪಾಲಿಸಬೇಕೆಂದೂ ಕೇಳಿಕೊಂಡನು. ಅದಕ್ಕೆ ವರುಣದೇವನು "ಮಹಾರಾಜ, ನಿನ್ನ ಇಚ್ಛೆಯನ್ನು ಪೂರೈಸಬಹುದು. ಅದಕ್ಕೇನೂ ಅಡ್ಡಿಯಿಲ್ಲ. ಆದರೆ ಒಂದು ಕರಾರು ಇದೆ. ಅದೇನೆಂದರೆ ನಿನಗೆ ಹುಟ್ಟುವ ಆ ಮೊದಲ ಸಂತಾನವನ್ನು ನನಗೆ ಬಲಿಕೊಡಬೇಕು. ಇದಕ್ಕೆ ನೀನು ಒಪ್ಪುವಿಯಾದರೆ ಸಂತಾನವನ್ನು ದಯಪಾಲಿಸುವೆನು" ಎಂದು ಮರುನುಡಿದನು. ಮಹಾರಾಜನು ವರುಣನ ಮಾತಿಗೆ ಒಪ್ಪಿಕೊಂಡನು. ವರುಣನು ತಥಾಸ್ತು ಎಂದು ಮಾಯವಾದನು. ಹರಿಶ್ಚಂದ್ರ ಮಹಾರಾಜನು ಸಂತಸಗೊಂಡು ಮನೆಗೆ ಹಿಂದಿರುಗಿದನು.

ವರುಣದೇವನ ವರಪ್ರಸಾದದಂತೆ ಹರಿಶ್ಚಂದ್ರ ಮಹಾರಾಜನ ಪತ್ನಿ ಚಂದ್ರಮತಿದೇವಿ ಗಂಡುಮಗುವನ್ನು ಹೆತ್ತಳು. ಮಗು ಹುಟ್ಟಿದ ಮೂರು ದಿನಗಳ ನಂತರ, ವರುಣದೇವನು ಹರಿಶ್ಚಂದ್ರನಿಗೆ ಪ್ರತ್ಯಕ್ಷನಾಗಿ, ಮಗುವನ್ನು ಬಲಿಕೊಡಬೇಕೆಂದು ಕೇಳಿಕೊಂಡನು. ಹರಿಶ್ಚಂದ್ರನು, "ವರುಣದೇವ, ಮಗು ಹುಟ್ಟಿ ಮೂರುದಿನ ಇನ್ನೂ ಕಳೆದಿಲ್ಲ. ಹನ್ನೊಂದು ದಿನಗಳಾದರೂ ಕಳೆಯಬೇಡವೇ? ಇಷ್ಟೇಕೆ ಅವಸರ?" ಎಂದು ಹೇಳಿ, ವರುಣದೇವನನ್ನು ಹಿಂದೆ ಕಳುಹಿಸಿದನು.

ಹನ್ನೊಂದನೇ ದಿನ ಕಳೆಯಿತು. ವರುಣದೇವನು ಪ್ರತ್ಯಕ್ಷನಾದನು. ಬಲಿಯನ್ನು ಕೇಳಿದನು. "ಹಾಲಹಸುಳೆಯನ್ನು ಬಲಿಕೊಡುವುದೇ? ಹಲ್ಲು ಮೂಡಲಿ. ಆ ಮೇಲೆ ಕೊಡುವೆನು" ಎಂದು ಹರಿಶ್ಚಂದ್ರನು ಎರಡನೆ ಸಲ ಹಿಂದೆ ಕಳುಹಿಸಿದನು. ಆಗಲೂ ವರುಣದೇವನು ಹಿಂದಿರುಗಿದನು. ಅದೇ ರೀತಿ ಹರಿಶ್ಚಂದ್ರನು ವರುಣನನ್ನು ಹಲವು ಬಾರಿ ಹಿಂದಿರುಗಿಸಿದನು. ಹರಿಶ್ಚಂದ್ರ ಮಹಾರಾಜನು ಹಲವುಬಾರಿ ಹಲವು ನೆವಹೇಳಿ ವರುಣನನ್ನು

ಹಿಂದಿರುಗಿಸುತ್ತಿರಲು, ರೋಹಿತಕುಮಾರನು ಪ್ರಾಯಕ್ಕೆ ಬಂದನು. ಹದಿನಾರು ವರ್ಷ ತುಂಬುವಾಗ ಅವನು ಕ್ಷತ್ರಿಯರಿಗೆ ಉಚಿತವಾದ ಯುದ್ಧ ವಿದ್ಯೆಯಲ್ಲಿಯೂ ರಾಜ್ಯಶಾಸನ ಶಾಸ್ತ್ರದಲ್ಲಿಯೂ ಪ್ರವೀಣನಾದನು. ಮಗನು ಪ್ರಾಯಕ್ಕೆ ಬಂದೊಡನೆಯೇ ಒಂದು ದಿನ ಹರಿಶ್ಚಂದ್ರಮಹಾರಾಜನು ಮಗನನ್ನು ಒಳಗೆ ಕರೆದು, "ಮಗನೇ, ನಾನು ನಿನ್ನನ್ನು ಪಡೆಯಬೇಕಾದರೆ, ವರುಣದೇವನನ್ನು ಪ್ರಾರ್ಥಿಸಿಕೊಂಡಿದ್ದೆ. ಆಗ ವರುಣದೇವನು "ನಿನಗೆ ಮೊದಲು ಹುಟ್ಟುವ ಮಗನನ್ನು ನನಗೆ ಬಲಿಕೊಡುವೆಯಾದರೆ ನಿನಗೆ ಸಂತಾನವಾಗುವುದೆಂ"ದು ವರವಿತ್ತನು. ವರುಣನ ಮಾತಿನಂತೆ ನಾನು ನಿನ್ನನ್ನು ಬಲಿಕೊಡಬೇಕಾಗಿದೆ. ಇಷ್ಟು ದಿನ ನಾನು ಹೇಗೂ ನೆವನ ಹೇಳಿದೆನು. ಇನ್ನದು ಸಾಧ್ಯವಿಲ್ಲ. ವರುಣದೇವನ ಒತ್ತಾಯ ಹೆಚ್ಚಿದೆ. ನಾನು ನಿನ್ನನ್ನು ಬಲಿಕೊಡಬೇಕಾಗಿದೆ. ಅದು ಅತೀ ಕಷ್ಟಕಾರ್ಯವೆಂದು ನನಗೆ ಗೊತ್ತಿದೆ" ಎಂದು ಮೌನವಾದನು.

ತಂದೆಯ ಮಾತು ಕೇಳಿದ ಮಗನು ಗಂಭೀರಭಾವವನ್ನು ತಾಳಿದನು. "ಅಪ್ಪಾ, ಮೊದಲನೆಯದಾಗಿ ನಿನಗೆ ಒಂದು ಪ್ರಾಣವನ್ನು ತೆಗೆಯುವ ಅಧಿಕಾರವಾದರೂ ಎಲ್ಲಿಂದ? ಅಷ್ಟೇ ಅಲ್ಲ, ವರುಣದೇವನಾದರೂ ನಿಜವಾದ ದೇವತೆಯಾಗಿದ್ದರೆ ಅಂತಹ ಬಲಿಯನ್ನು ಕೇಳಲಾರನು. ಪ್ರಕೃತಿಯಿಂದ ಜನಿಸಿದ ಈ ಜೀವವನ್ನು ಕೇಳಲು, ತೆಗೆಯಲು ಅವನಿಗೂ ಅಧಿಕಾರವಿಲ್ಲ. ನೀನಾದರೋ ವರುಣನಿಗೆ ಮಾತುಕೊಟ್ಟೆನೆನ್ನುತ್ತಿ! ಹಾಗೆ ಮಾತು ಕೊಡುವುದೆಂದರೆ ಅದು ಹುಚ್ಚಾಟ. ನಮ್ಮ ಕ್ಷಾತ್ರನೀತಿಯಂತೆ ತಂದೆ ಮಗನನ್ನು ಬಲಿಕೊಡಬಹುದು. ಅದು ರಾಜ್ಯದ ಹಿತಕ್ಕಾಗಿ, ದೇಶದ ರಕ್ಷಣೆಗಾಗಿ. ದೇಶದ ರಕ್ಷಣೆಯ ಮಾತು ಬಂದಾಗ ತಂದೆ ಮಗನನ್ನು ಬಲಿಕೊಡಬಹುದೆಂಬುದು ನಿನಗೂ ಗೊತ್ತಿದೆ. ಬೇರೆ ಯಾವ ಪ್ರಯೋಜನಕ್ಕೂ ತಂದೆಗೆ ಮಗನನ್ನು ಬಲಿಕೊಡುವ ಅಧಿಕಾರವಿಲ್ಲ, ನ್ಯಾಯವಿಲ್ಲ, ನೀತಿಯಿಲ್ಲ. ಅಷ್ಟೇ ಅಲ್ಲ. ಆ ವರುಣನಿಗೂ ನನಗೂ ಸಂಬಂಧವಿಲ್ಲ. ನಿನ್ನ ರಾಜ್ಯದ ಮೇಲೆ, ಸಂಪತ್ತಿನ ಮೇಲೆ ನನಗೆ ಅಪೇಕ್ಷೆ ಇಲ್ಲದ ಕಾರಣ, ಆಸೆ ಇಲ್ಲದಿರುವುದರಿಂದ ನನಗೂ ನಿನಗೂ ಸಂಬಂಧವಿಲ್ಲ. ಇದೋ ನೋಡು, ನನ್ನ ಉಪನಯನ ಕಾಲದಲ್ಲಿ ಸೋದರಮಾವನು ಕೊಟ್ಟ ಇದೊಂದು ಬಿಲ್ಲು ಮಾತ್ರ ನನ್ನದು. ಇದನ್ನು ಮಾತ್ರ ತೆಗೆದುಕೊಂಡು ಹೋಗುತ್ತೇನೆ" ಎಂದು ತಂದೆಯನ್ನೂ

ರಾಜ್ಯವನ್ನೂ ಬಿಟ್ಟು ಆಗಲೇ ಅಲ್ಲಿಂದಲೇ ಹೊರಟು ಕಾಡಿಗೆ ನಡೆದನು. ವರುಣನನ್ನು ಧಿಕ್ಕರಿಸಿ ಅರಣ್ಯಕ್ಕೆ ಹೊರಟ ರೋಹಿತನಿಗೆ ಸಹಾಯ ಮಾಡಲು ವರುಣನ ವಿರೋಧಿಯಾದ ಇಂದ್ರದೇವನೂ ಅರಣ್ಯದಲ್ಲಿ ಸಿದ್ಧನಾಗಿಯೇ ಇದ್ದನು. ಇಂದ್ರನ ಸಹಾಯದಿಂದ ರೋಹಿತನು ಅರಣ್ಯದಲ್ಲಿ ಸುಖಸಂತೋಷಗಳಿಂದ ಕಾಲಕಳೆಯತೊಡಗಿದನು

ಇತ್ತ ವರುಣನು ಸುಮ್ಮನೆ ಕುಳಿತಿರಲಿಲ್ಲ. ಹರಿಶ್ಚಂದ್ರನು ಕೊಟ್ಟ ಮಾತಿಗೆ ತಪ್ಪಿದೆನಲ್ಲವೆ? ಅದಕ್ಕಾಗಿ ವರುಣನು ಹರಿಶ್ಚಂದ್ರನನ್ನು ಬಗೆಬಗೆಯಾಗಿ ಪೀಡಿಸತೊಡಗಿದನು. ನೀರಿನ ಒಡೆಯನಾದ ಆ ವರುಣನು ಹರಿಶ್ಚಂದ್ರನಿಗೆ ನೀರುಕುತ್ತ ಬರುವಂತೆ ಮಾಡಿದನು. ಹರಿಶ್ಚಂದ್ರನ ಕೈಕಾಲು ಮೋರೆಗಳ ಮೇಲೆ ನೀರು ತುಂಬಿಕೊಂಡಿತು. ಹೊಟ್ಟೆಯಲ್ಲಿ ನೀರು ತುಂಬಿಕೊಂಡು ಹೊಟ್ಟೆ ಉಬ್ಬರಿಸಿತು. ಆತನಿಗೆ ಎದ್ದು ಅಚೆಯೀಚೆ ನಡೆಯಲೂ ಕುಳಿತುಕೊಳ್ಳಲೂ ಆಗಲಿಲ್ಲ. ಬಾಯಿಗೆ ರುಚಿ ಇಲ್ಲ. ಹೊಟ್ಟೆಗೆ ಹಸಿವಿಲ್ಲ, ಕಣ್ಣಿಗೆ ನಿದ್ರೆ ಇಲ್ಲ, ಹಗಲು ಹರ್ಷವಿಲ್ಲ, ಇರುಳು ವಿಶ್ರಾಂತಿ ಇಲ್ಲ, ಬೇಸರವೇ ಬೇಸರ, ನೋವೇ ನೋವು. ಹೀಗೆ ಜಲೋದರರೋಗದಿಂದ ಪೀಡಿತನಾದ ಹರಿಶ್ಚಂದ್ರನಿಗೆ ಜೀವಹೋಗುವಂತಿತ್ತು. ಅವನು ನಿರಾಶೆಯಿಂದ ನರಳುತ್ತಿದ್ದನು. ಇದಕ್ಕೆ ಯಾವ ಮದ್ದೂ ತಾಗಲಿಲ್ಲ, ಮಂತ್ರವೂ ಹತ್ತಲಿಲ್ಲ. ಹರಿಶ್ಚಂದ್ರನು ಹೀಗೆ ರೋಗದಿಂದ ನರಳುತಿದ್ದಾಗ ವರುಣನು ಆಗಾಗ ಬಂದು ಅವನನ್ನು ಹೀಯಾಳಿಸಿ ಮತ್ತಷ್ಟು ಪೀಡಿಸುತಿದ್ದನು. ಕೊಟ್ಟ ಮಾತು ತಪ್ಪಿದುದರ ಫಲವಿದು ಎಂದು ಹಳಿದು ಹಂಗಿಸುತಿದ್ದನು. ಬಯ್ದು ಭಂಗಿಸುತಿದ್ದನು. ಹೀಗಿರಲು ಒಮ್ಮೆ ಆ ವರುಣದೇವನು, "ಮಹಾರಾಜಾ, ಏನುಮಾಡಿದರೂ ನಿನ್ನ ರೋಗ ಗುಣವಾಗದು. ರೋಗ ಮಾಯವಾಗಬೇಕಾದರೆ ಕೊಟ್ಟ ಮಾತಿನಂತೆ ನಡೆಯಬೇಕು. ನಿನ್ನ ಮಗನಿಗೆ ನರಬಲಿಯಾಗಲೇ ಬೇಕು. ಒಂದು ವೇಳೆ ನಿನ್ನ ಮಗನನ್ನೆ ಬಲಿಕೊಡಲು ನಿನಗೆ ಸಾಧ್ಯವಿಲ್ಲದಿದ್ದರೆ ಯಾರಾದರೂ ಇತರ ಯುವಕನನ್ನು ಬಲಿಕೊಡು. ಅಂತಹ ಬಲಿಯ ಬಾಲಕನು ಬ್ರಾಹ್ಮಣನ ಬಾಲಕನಾಗಿರಬೇಕೆ ಹೊರತು ಇತರ ಜಾತಿಯವನಾಗಕೂಡದು. ಅದು ಸಾಧ್ಯವಿದೆಯೋ ನೋಡು! ಬಲಿಕೊಟ್ಟು ಪ್ರಾಣವನ್ನು ಉಳಿಸಿಕೊ' ಎಂದು ಹೇಳಿ ಮಾಯವಾದನು. ಹರಿಶ್ಚಂದ್ರನಿಗೆ ರೋಗದ ನೋವು ಅಸಾಧ್ಯವಾಯಿತು. ಮಂತ್ರಿ

ಯೊಡನೆ ವಿಚಾರಿಸಿದನು. ಮಗನಿಗೆ ಹೇಳಿ ಕಳುಹಿದನು. "ಮಗನೇ, ಏನಿದ್ದರೂ ನೀನು ನನ್ನ ಮಗನಾಗಿರುವೆ. ನಾನು ಜಲೋದರರೋಗದಿಂದ ಪೀಡಿತನಾಗಿ ಸಾಯಲು ಹೊರಟಿರುವೆ. ಆ ವರುಣನು ನನ್ನ ಜೀವವನ್ನು ಹೀಗೆಯೇ ಬಿಡಲಾರನು. ಅಷ್ಟೇ ಅಲ್ಲ, ಮುಂದೆ ನನ್ನ ನಂತರ ನೀನು ರಾಜನಾದಾಗ ನಿನ್ನನ್ನೂ ಆತನು ಪೀಡಿಸದಿರನು. ನಿನಗೂ ತೊಂದರೆ ಕೊಡದಿರನು. ಆದುದರಿಂದ ಆ ವರುಣನ ಅಪೇಕ್ಷೆಯಂತೆ ಮನುಷ್ಯ ಬಲಿಗಾಗಿ ಯಾರಾದರೊಬ್ಬ ಬ್ರಾಹ್ಮಣ ಯುವಕನನ್ನು ಹುಡುಕಿಸು. ಅಂತಹ ಬಲಿಗಾಗಿ ದ್ರವ್ಯವೆಷ್ಟು ವೆಚ್ಚವಾದರೂ ಚಿಂತೆಯಿಲ್ಲ. ಅರ್ಧ ರಾಜ್ಯವನ್ನು ಬೇಕಾದರೂ ಆ ಬಲಿಪುರುಷನಿಗಾಗಿ ಕೊಡಬಲ್ಲೆ. ನೀನು ಬಲಿಪುರುಷನೊಬ್ಬನನ್ನು ಹುಡುಕಿ ತಾ. ನನ್ನನ್ನು ಬದುಕಿಸು. ನಿನ್ನನ್ನು ಉಳಿಸಿಕೊ. ಇಕ್ಷ್ವಾಕುವಂಶದ ಕುಡಿಯನ್ನು ಚಿಗುರಿಸಿ ಕೀರ್ತಿಲತೆಯನ್ನು ಹಬ್ಬಿಸು. ಇದು ನನ್ನ ಕಡೆಯ ಬೇಡಿಕೆ" ಎಂದು ಹೇಳಿದನು.

ತಂದೆಯ ಸಂದೇಶ ಕೇಳಿ ಮಗನ ಮನಸ್ಸು ಮರುಗಿತು. ಮಗ ರೋಹಿತ ತಂದೆಯ ಅಪೇಕ್ಷೆಯಂತೆ ಬಲಿಗಾಗಿ ಬ್ರಾಹ್ಮಣಯುವಕನನ್ನು ಹುಡುಕಲು ಹೊರಟನು. ತಂದೆಯೊಬ್ಬನೊಡನೆ ಮಗನನ್ನು ಕೇಳಿದಾಗ, "ಅಯ್ಯೋ ಹುಚ್ಚ, ನೀನು ನಿನ್ನ ತಂದೆಗೆ ಹೇಗೋ ಹಾಗೆಯೇ ನನ್ನ ಮಗನೂ ನನಗೆ ಎಂಬುದನ್ನು ಅರಿಯೆಯಾ? ಆ ಮಾತು ಬಿಡು" ಎಂದು ಪೋರೆ ತಿರುಗಿಸಿದನು. ಇನ್ನೊಬ್ಬ ತಂದೆಯು, "ರೋಹಿತ, ನೀನು ಕ್ಷತ್ರಿಯನು. ಕ್ಷತ್ರಿಯನು ಎಂದಿಗೂ ಮರಣಕ್ಕೆ ಹೆದರುವುದಿಲ್ಲ. ನೀನು ಧೈರ್ಯದಿಂದ ಮರಣವನ್ನು ಎದುರಿಸಬೇಕಾದವನು. ಹೇಡಿಯಂತೆ ಹೆದರಿ ಸಾತ್ವಿಕನಾದ ಬ್ರಾಹ್ಮಣನನ್ನು ಬಲಿಕೊಡಲು ನೋಡುವೆ. ನಿನ್ನ ಈ ಅಲ್ಪಬುದ್ಧಿಗೆ ಏನೆನ್ನಬೇಕೋ" ಎಂದು ನುಡಿದನು. ಮತ್ತೊಬ್ಬನ ಬಳಿಗೆ ಹೋದಾಗ ಅವನು, "ರೋಹಿತ, ನೀನು ಅಷ್ಟು ಧೈರ್ಯಶಾಲಿಯಾದರೆ ಆ ವರುಣನನ್ನೇ ಹಿಡಿದು ಬಲಿಕೊಡು" ಎಂದು ನಗಾಡಿದನು. ಹೀಗೆ ಎಲ್ಲಿ ಹೋದರೂ ರೋಹಿತನನ್ನು ಹೀಯಾಳಿಸುವವರೇ.

ರೋಹಿತನು ಹಲವು ದಿನಗಳ ವರೆಗೆ ಬಲಿಪುರುಷನಿಗಾಗಿ ಸುತ್ತಾಡಿ ಕೊನೆಗೆ ಒಬ್ಬ ಬಡ ಬ್ರಾಹ್ಮಣನನ್ನು ಕಂಡನು. ಅವನ ಹೆಸರು ಅಜೀಗರ್ತ. ಅವನಿಗೆ ದಿನದ ಕೂಳಿಗೆ ಗತಿಯಿರಲಿಲ್ಲ. ಹೆಂಡತಿ ಮತ್ತು ಮೂರು ಮಕ್ಕಳು

ಇದ್ದರು. ಅವರಲ್ಲಿ ಮೊದಲನೆಯವನ ಹೆಸರು ಶುನಃಪುಚ್ಛ, ಶುನಃಶ್ಶೇಫ ಮತ್ತು ಶುನೋಲಾಂಗೂಲ ಎಂದು. ಆ ಹೆಸರುಗಳ ಅರ್ಥವೇನು ಗೊತ್ತೇ? 'ನಾಯಿಬಾಲ' ಎಂದು. ಅಜೀಗರ್ತನಂತಹ ಲೋಭಿಗಳೂ, ಬಡವರೂ ಆ ಕಾಲದಲ್ಲಿ ಬೇರೆ ಯಾರೂ ಇರಲಿಲ್ಲ. ಒಂದೆರಡು ದನಗಳನ್ನು ಸಾಕಿ ಒಂದು ಬಿಡಾರಮಾಡಿ ಕುಳಿತುಕೊಳ್ಳಬೇಕೆಂದು ಅಜೀಗರ್ತನು ಹಲವು ಕಾಲದಿಂದ ಆಸೆಪಡುತ್ತಿದ್ದನು. ಈಗ ರೋಹಿತನು ಬಂದು ಒಬ್ಬ ಹುಡುಗನಿಗೆ ಬದಲಾಗಿ ಮೂರು ದನಗಳನ್ನು ಕೊಡುತ್ತೇನೆ ಎಂದಾಗ ಅವನ ಆನಂದಕ್ಕೆ ಪಾರವೇ ಇಲ್ಲವಾಯಿತು. ನೂರು ದನಗಳಿಗೆ ಅವನು ಒಬ್ಬ ಮಗನನ್ನು ಕೊಡಲು ಒಪ್ಪಿದನು.

ಆದರೆ, ಹಿರಿಯ ಮಗನನ್ನು ಮಾತ್ರ ಕೊಡಲು ಆಗುವುದಿಲ್ಲವೆಂದನು. ತಾನು ಸತ್ತ ಮೇಲೆ ತನಗೆ ಪಿಂಡ ದಾನಮಾಡಲು ಹಿರಿಯ ಮಗನೇ ಬೇಕೆಂದನು.

ಆಗ ರೋಹಿತನು ಕಿರಿಯ ಮಗನನ್ನೆ ಕೇಳಿದನು. "ಕಿರಿಯ ಮಗನನ್ನು ನಾನು ಪ್ರೀತಿಯಿಂದ ಸಾಕಿರುವೆನು. ಅವನನ್ನು ಕೊಡಲಾರೆ" ಎಂದು ತಾಯಿ ಹೇಳಿದಳು. ಇನ್ನು ಉಳಿದವನು ನಡುವಿನ ಮಗ ಶುನಶ್ಶೇಫ ರೋಹಿತನು ಅಜಿಗರ್ತನಿಗೆ ನೂರು ದನಗಳನ್ನು ಕೊಟ್ಟು ಶುನಶ್ಶೇಫನನ್ನು ಕರಕೊಂಡು ಅಯೋಧ್ಯೆಗೆ ಹೊರಟನು. ಅವನೊಂದಿಗೆ ಅವನ ತಾಯಿ ತಂದೆಯರನ್ನು ಬರಹೇಳಿದನು. ಅಯೋಧ್ಯೆಗೆ ಹೋಗಿ, ರೋಗದಿಂದ ನರಳುತಿದ್ದ ತಂದೆಯನ್ನು ಕಂಡು, ಎಲ್ಲ ವಿಷಯವನ್ನು ವಿವರಿಸಿದನು. ಹರಿಶ್ಚಂದ್ರನು ಕೂಡಲೇ ವರುಣನನ್ನು ಪ್ರಾರ್ಥಿಸಿದನು. ರೋಹಿತನ ಬದಲಾಗಿ ಶುನಶ್ಶೇಫನನ್ನು ತೆಗೆದುಕೊಳ್ಳೆಂದು ಬೇಡಿದನು. ವರುಣನು ಹರಿಶ್ಚಂದ್ರನ ಬೇಡಿಕೆಗೆ ಸಮ್ಮತಿಯಾಗಲು, ಹರಿಶ್ಚಂದ್ರನು ವಿಶ್ವಾಮಿತ್ರನನ್ನು ಕರೆಯಿಸಿ ಯಜ್ಞವನ್ನು ಪ್ರಾರಂಭಿಸಿದನು. ಜಮದಗ್ನಿ, ವಸಿಷ್ಠ ಮೊದಲಾದವರು ಯಜ್ಞದಲ್ಲಿ ಭಾಗವಹಿಸಿದರು.

ಯಜ್ಞ ಪ್ರಾರಂಭವಾಗುವಾಗ ಯಜ್ಞಪಶುವಾದ ಶುನಶ್ಶೇಫನನ್ನು ಬಲಿಕಂಭಕ್ಕೆ ಕಟ್ಟಿಹಾಕಬೇಕು. ಹಾಗೆ ಕಟ್ಟಿಹಾಕಲು ಯಾರೂ ಮುಂದೆ ಬರಲಿಲ್ಲ. ಮನುಷ್ಯನನ್ನು ಬಲಿಕಂಭಕ್ಕೆ ಕಟ್ಟಲು ಯಾರು ಬರುತ್ತಾರೆ? ಅಲ್ಲದೆ ಆ ಕಾಲದಲ್ಲಿ ಮನುಷ್ಯರನ್ನು ಬಲಿಕೊಡಬಾರದೆಂಬ ಭಾವನೆ ಹರ

ಡಿತ್ತು. ಆದರಿಂದಾಗಿ ಯಾರೂ ಮುಂದೆ ಬರಲಿಲ್ಲ. ತನಗೆ ನೂರು ದನಗಳನ್ನು ಕೊಡುವುದಾದರೆ ತಾನೇ ಮಗನನ್ನು ಬಲಿಕಂಭಕ್ಕೆ ಕಟ್ಟುವುದಾಗಿ ಶುನಶ್ಯೇಫನ ತಂದೆ ಅಜೀಗರ್ತನೇ ಮುಂದೆ ಬಂದನು. ಆಸೆಗೆ ಅಂತ್ಯವಿದೆಯೋ? ಅಂತೆಯೋ ಹರಿಶ್ಚಂದ್ರ ಮಹಾರಾಜನು ಉತ್ತಮವಾದ ನೂರು ದನಗಳನ್ನು ಅಜೀಗರ್ತನಿಗೆ ಕೊಟ್ಟು ಶುನಶ್ಯೇಫನನ್ನು ಬಲಿಕಂಭಕ್ಕೆ ಕಟ್ಟಲು ಕೇಳಿಕೊಂಡನು. ಅಜೀಗರ್ತನು ಮಗನನ್ನು ಬಲಿಕಂಭಕ್ಕೆ ಕಟ್ಟಲು ತೊಡಗಿದಾಗ ವಿಶ್ವಾಮಿತ್ರನು, "ಅಯ್ಯೋ ಬ್ರಾಹ್ಮಣ! ನಿನ್ನ ಬ್ರಾಹ್ಮಣ ಧರ್ಮಕ್ಕೆ ಬೆಂಕಿಹಿಡಿಯಲಿ" ಎಂದು ಶಪಿಸಿದನು. ಅಜೀಗರ್ತನು ಮಗನನ್ನು ಬಲಿಕಂಭಕ್ಕೆ ಕಟ್ಟುವ ಕಾರ್ಯವನ್ನು ಮುಗಿಸಿದನು. ಯಜ್ಞ ಮುಂದುವರಿಯಿತು.

ಇನ್ನು ಯಜ್ಞಪಶುವಾದ ಶುನಶ್ಯೇಫನನ್ನು ಬಲಿ ಕೊಡಬೇಕು. ಬಲಿ ಕೊಡಲು ಯಾರು ಬರುವರು? ಬಹಳ ಹಿಂದಿನ ಕಾಲದಲ್ಲಿ ಯಜ್ಞದಲ್ಲಿ ಬಲಿ ಪ್ರಾಣಿಯನ್ನು ಪುನಃ ಜೀವಬರಿಸುತಿದ್ದರಂತೆ! ಈಗ ಅಂತಹ ಶಕ್ತಿ ಯಾರಿಗಿದೆ? ಬಲಿಯಾದ ಪ್ರಾಣಿ ಜೀವಕಳಕೊಳ್ಳಬೇಕು. ಮನುಷ್ಯನ ಜೀವ ತೆಗೆಯಲು ಯಾರು ಸಿದ್ಧರಿದ್ದಾರೆ? ಪ್ರತಿಯೊಬ್ಬನೂ ಆ ಕೆಲಸ ತನ್ನಿಂದಾಗದೆಂದು ಹಿಂಜರಿದರು. ಆ ಸಮಯದಲ್ಲಿಯೂ ಅಜೀಗರ್ತನು ತನ್ನ ಮಗನನ್ನು ತಾನು ಬಲಿಕೊಡುತ್ತೇನೆಂದೂ ಈ ಬಗ್ಗೆ ನೂರು ಉತ್ತಮ ಗೋವುಗಳನ್ನು ತನಗೆ ಕೊಡಬೇಕೆಂದೂ ಹೇಳಿದನು. ತನ್ನ ಮಗನನ್ನು ಕೊಲ್ಲುವ ಇವನೆಂತಹ ಬ್ರಾಹ್ಮಣನಪ್ಪಾ! ಇವನೆಂತಹ ಚಂಡಾಲನಪ್ಪಾ! ಎಂದು ವಿಶ್ವಾಮಿತ್ರನು ತನ್ನಷ್ಟಕ್ಕೆ ಹೇಳಿಕೊಂಡನು.

ತನ್ನ ತಂದೆಯೇ ತನ್ನನ್ನು ಬಲಿಕೊಡಲು ಸಿದ್ಧನಾದುದನ್ನು ಕಂಡು ಶುನಶ್ಯೇಫನು ದಾರಿಕಾಣದಾದನು. ಅವನು ಸೃಷ್ಟಿಕರ್ತನಾದ ಪ್ರಜಾಪತಿಯೊಡನೆ ತನ್ನನ್ನು ಬದುಕಿಸಬೇಕೆಂದು ಬೇಡಿಕೊಂಡನು. "ಸೃಷ್ಟಿಯ ಯಜಮಾನನೇ! ಮನುಷ್ಯರ ಮೂಲಪುರುಷನೇ! ನನ್ನನ್ನು ಈ ಮರಣದಿಂದ ಕಾಪಾಡು" ಎಂದು ಬೇಡಿಕೊಂಡನು.

ಶುನಶ್ಯೇಫನ ಪ್ರಾರ್ಥನೆಯನ್ನು ಕೇಳಿ ಪ್ರಜಾಪತಿಯು ದಯಗೊಂಡನು. ಅವನು ಈ ಮನುಷ್ಯಯಜ್ಞವನ್ನು ನಿಲ್ಲಿಸಲು ನಿಶ್ಚಯಿಸಿದನು. ಆದರೆ, ಶುನಶ್ಯೇಫನನ್ನು ಬಲಿಕೊಡಲು ಅಗ್ನಿದೇವನಿಗೆ ಒಪ್ಪಿಸಿ ಆಗಿತ್ತು.

ಆದುದರಿಂದ ಪ್ರಜಾಪತಿಯು ಅಗ್ನಿದೇವನ ಅಭಿಪ್ರಾಯವನ್ನು ಕೇಳಿದನು. ಅಗ್ನಿದೇವನು ಪ್ರಜಾಪತಿಯ ಮಾತಿಗೆ ಒಪ್ಪಿಕೊಂಡು ಬಲಿಯನ್ನು ಬಿಟ್ಟು ಕೊಟ್ಟನು. ಆದರೆ ಸವಿತೃದೇವತೆಯ ಒಪ್ಪಿಗೆಬೇಕಿತ್ತು. ಸವಿತೃದೇವತೆಯೂ ಆತನ ಹಕ್ಕನ್ನು ಬಿಟ್ಟುಕೊಡಲು ಕಡೆಗೆ ವರುಣನೊಡನೆ ಒಂದು ಮಾತು ಕೇಳಬೇಕೆಂದಾಯಿತು. ಕೂಡಲೇ ಹರಿಶ್ಚಂದ್ರನು ವರುಣನನ್ನು ಹೀಗೆಂದು ಪ್ರಾರ್ಥಿಸಿದನು: "ವರುಣದೇವ, ನಿನ್ನಿಂದಾಗಿಯೇ ನದಿಗಳು ಹರಿದು ಸಮುದ್ರಕ್ಕೆ ಸೇರುತ್ತವೆ. ಮೋಡಗಳು ಪರ್ವತವನ್ನು ಮುಸುಕುತ್ತವೆ. ಹಕ್ಕಿಗಳು ಆಕಾಶದಲ್ಲಿ ಹಾರಾಡುತ್ತವೆ. ಮೀನುಗಳು ನೀರಿನಲ್ಲಿ ಈಜಾಡುತ್ತವೆ. ವಾಯುದೇವನ ಹಾದಿ ಕೂಡ ನಿನಗೆ ಗೊತ್ತಿದೆ. ಪ್ರತಿಯೊಂದು ಗುಟ್ಟಿನ ವಿಷಯವೂ ನಿನಗೆ ತಿಳಿದಿದೆ. ಅನಾದಿ ಅನಂತ ವಿಷಯಗಳನ್ನು ನೀನು ಅರಿತಿರುವೆ. ಪಾಪಿಗಳ ಪಾಪವನ್ನು ತೊಳೆಯುವ ಶಕ್ತಿ ನಿನಗಿದೆ. ನೀನೀಗ ನನ್ನ ಅಪರಾಧವನ್ನು ಕ್ಷಮಿಸು." ಹರಿಶ್ಚಂದ್ರನ ಪ್ರಾರ್ಥನೆಯನ್ನು ಕೇಳಿ ಪ್ರೀತಿಗೊಂಡ ವರುಣನು ತನಗೆ ಮನುಷ್ಯ ಬೇಕಾಗಿಲ್ಲವೆಂದೂ, ಇನ್ನು ಮುಂದೆ ಯಾರೂ ಮನುಷ್ಯಬಲಿ ಕೊಡಬಾರದೆಂದೂ ಅಪ್ಪಣೆಯಿತ್ತನು. ಅಲ್ಲದೆ ಈಗಿನ ಬಲಿಯನ್ನು ಸಂಪೂರ್ಣ ಬಿಟ್ಟುಕೊಡಬೇಕಾದರೆ ಆ ಬಲಿಯಲ್ಲಿ ಪಾಲುಗಾರರಾದ ವಿಶ್ವೇದೇವತೆಗಳ ಒಪ್ಪಿಗೆ ಬೇಕಾಗಿದೆಯೆಂದೂ ಹೇಳಿದನು.

ಕೂಡಲೇ ಹರಿಶ್ಚಂದ್ರನು ವಿಶ್ವೇದೇವತೆಗಳನ್ನು ಪ್ರಾರ್ಥಿಸಲು, ವಿಶ್ವೇದೇವತೆಗಳು ಪ್ರತ್ಯಕ್ಷರಾಗಿ, ಬಲಿಕೊಟ್ಟು ಆದ ಮೇಲೆಯೂ ತಮಗೆ ಅಧಿಕಾರವಿರುವುದೆಂದೂ, ಇದರಿಂದ ತಮ್ಮ ಒಪ್ಪಿಗೆ ಅಗತ್ಯವಿಲ್ಲವೆಂದೂ, ಆದರೆ ಯಜ್ಞ ಪ್ರಾರಂಭವಾದ ಮೇಲೆ ಅದನ್ನು ನಿಲ್ಲಿಸಬೇಕಾದರೆ ಇಂದ್ರನ ಒಪ್ಪಿಗೆ ಬೇಕಾಗುವುದೆಂದೂ ಹೇಳಿದರು. ಆಗಲೇ ಇಂದ್ರನನ್ನು ಪ್ರಾರ್ಥಿಸಿ ಕೇಳಿದಾಗ, ಅವನು ಈ ವಿಷಯದಲ್ಲಿ ತೀರ್ಮಾನಹೇಳಲು ಉಷಾದೇವಿಯೇ ಸಮರ್ಥಳೆಂದು ಅವಳ ಹೆಸರು ಸೂಚಿಸಿದನು.

ಉಷಾದೇವಿ ಪ್ರತ್ಯಕ್ಷಳಾದಳು: "ಮನುಷ್ಯ ಯಜ್ಞಕ್ಕೆ ನನ್ನ ಸಮ್ಮತಿಯಿಲ್ಲ. ಅದು ರಾತ್ರಿ ಸಂಚರಿಸುವ ದುಷ್ಟಜನರ ಕೆಲಸ. ಇನ್ನು ಮುಂದೆ ಯಜ್ಞದ ಹೆಸರಲ್ಲಿ ಮನುಷ್ಯರನ್ನು ಕೊಲ್ಲಬಾರದು, ಕೊಲ್ಲಕೂಡದು. ಒಂದು ವೇಳೆ ಯಾರಾದರೂ, ದೇವತೆಗಳಿಗೆ ಮನುಷ್ಯರಕ್ತ ಬೇಕೆಂದೇ ಆದರೆ

ಅದನ್ನು ಯುದ್ಧಗಳ ಮೂಲಕ ತೆಗೆದುಕೊಳ್ಳಬೇಕು. ಯುದ್ಧದಲ್ಲಿ ಹೊರತು ಮನುಷ್ಯರನ್ನು ಕೊಲ್ಲಕೂಡದು. ಮನುಷ್ಯನು ತಾನಾಗಿಯೇ ದೇಶದ ಜನರ ರಕ್ಷಣೆಗಾಗಿ ದೇಹತ್ಯಾಗ ಮಾಡಬಹುದೇ ಹೊರತು ಇತರ ಕಾರಣ ಗಳಿಗಾಗಿ ಸಾಧ್ಯವಿಲ್ಲ. ಹಾಗೆಯೇ ಈ ಅಜೀಗರ್ತನಂತೆ ತಂದೆಗೆ ಮಗನನ್ನು ಮಾರಾಟ ಮಾಡುವ ಅಧಿಕಾರವಿಲ್ಲ. ಸೃಷ್ಟಿಯಲ್ಲಿ ದೊರಕುವ ಹೂಹಣ್ಣು ಗಳಿಂದಲೇ ಆ ಯಜ್ಞಕಾರ್ಯವನ್ನು ಮಾಡಬಹುದು. ನಿಮ್ಮೆಲ್ಲರ ಹೃದ ಯವೂ ಪರಿಶುದ್ಧವಾಗಲಿ ಎಂದು ಹೇಳಿ ಮಾಯವಾದಳು."

ಆ ಮೇಲೆ ಆ ಯಜ್ಞಕಾರ್ಯವನ್ನು ಅಲ್ಲಿಗೇ ನಿಲ್ಲಿಸಿದರು. ಶುನ ಶ್ಯೇಫನನ್ನು ಬಲಿಕಂಭದಿಂದ ಬಿಡಿಸಿದರು. ಹರಿಶ್ಚಂದ್ರನ ಉಬ್ಬರಿಸಿದ ಹೊಟ್ಟೆ ಕೂಡಲೇ ಸಣ್ಣದಾಯಿತು. ಅವನ ಜಲೋದರ ರೋಗ ಮಾಯ ವಾಯಿತು. ಅವನು ಸೌಖ್ಯಹೊಂದಿದನು. ಅಲ್ಲಿ ನೆರೆದಿದ್ದ ಜನರ ಸಂತೋ ಷಕ್ಕೆ ಪಾರವೇ ಇಲ್ಲ.

ಆ ಸಮಯದಲ್ಲಿ ಇಂದ್ರನು ಮುಂದೆ ಬಂದು ಶುನಶ್ಯೇಫನನ್ನು ತನ್ನ ಬಳಿಗೆ ಕರೆದನು. "ನೀನು, ಈ ಬಲಿಯಿಂದ ಬದುಕಿದವರಲ್ಲಿ ಮೊದಲನೆ ಯವನು. ನಿನಗೆ ಸೋಮವೆಂಬ ಈ ವನಸ್ಪತಿಯಿಂದ ಅಂಜಾಸವತಿಯೆಂಬ ಪಾನಕವನ್ನು ಮಾಡಲು ಕಲಿಸುವೆನು. ಅದನ್ನು ಈಗಲೇ ತಯಾರಿಸಿ ಇಲ್ಲಿ ನೆರೆದ ದೇವತೆಗಳಿಗೆ ಹಂಚಿಬಿಡು. ಅಂಜಾಷನದೊಡನೆ ತುಪ್ಪಲಿಶಗಳನ್ನು ದೇವತೆಗಳಿಗೆ ಸಮರ್ಪಿಸು. ಅಲ್ಲಿಗೆ ಯಜ್ಞವು ಪೂರ್ಣವಾಗುವುದು. ಇನ್ನು ಮುಂದೆ ಯಜ್ಞದಲ್ಲಿ ಯಾರಿಗಾದರೂ ಬಲಿಕೊಡಬೇಕೆಂದು ಮನಸ್ಸಿದ್ದರೆ ಒಂದು ಆಡನ್ನು ಬಲಿಕೊಟ್ಟರೆ ಸಾಕು. ಅದೂ, ಈ ಕಾಲದಲ್ಲಿ ಅಗತ್ಯ ವಿಲ್ಲ" ಎಂದು ಹೇಳಿದನು.

"ಬೇರಾದರೆ ಆಡನ್ನು ಬಲಿಕೊಟ್ಟರೆ ಸಾಕು ಎನ್ನಲು ಕಾರಣವೇನು?" ಎಂದು ಶುನಶ್ಯೇಫನು ಇಂದ್ರನೊಡನೆ ಕೇಳಿಕೊಳ್ಳಲು, ಇಂದ್ರನು, "ಹಿಂದಿನ ಕಾಲದಲ್ಲಿ ಒಮ್ಮೆ ಮನುಷ್ಯರನ್ನು ಬಲಿಕೊಟ್ಟು ಯಜ್ಞಮಾಡುತಿದ್ದಾಗ ಬಲಿ ಯಾಗುವ ಮನುಷ್ಯನ ಹೃದಯದಲ್ಲಿ ಸೇರಿಕೊಂಡಿದ್ದ ಮೇಧಾ ಎಂಬ ಶಕ್ತಿ ಯೊಂದು ಮನುಷ್ಯನ ದೇಹವನ್ನು ಬಿಟ್ಟು ಕೊಂಡು ಅಶ್ವದ ಶರೀರವನ್ನು ಹೊಕ್ಕಿತು. ಆ ಅಶ್ವವನ್ನು ಬಲಿಕೊಟ್ಟಾಗ ಮೇಧಾಶಕ್ತಿ ವೃಷಭದ ಶರೀರ ವನ್ನು ಸೇರಿತು. ಬಲಿಯಾದ ಅಶ್ವವು ಬಳಿಕ ಜಿಂಕೆಯಾಯಿತು. ವೃಷಭ

ವನ್ನು ಬಲಿ ಇತ್ತಾಗ ಮೇಧಾ ಶಕ್ತಿಯು ವೃಷಭ ದೇಹವನ್ನು ಬಿಟ್ಟು ಕುರಿಯ ಶರೀರವನ್ನು ಸೇರಿತು. ಬಲಿಯಾದ ವೃಷಭ ಶಾಲಿಯೆಂಬ ಪ್ರಾಣಿಯಾಗಿ ಪರಿಣಮಿಸಿತು. ಮುಂದೆ ಕುರಿಯನ್ನು ಬಲಿ ಇತ್ತಾಗ ಮೇಧಾ ಶಕ್ತಿಯು ಆಡಿನ ಶರೀರವನ್ನು ಹೊಕ್ಕು ಅಲ್ಲಿ ಶಾಶ್ವತವಾಗಿ ಉಳಿಯಿತು. ಬಲಿಯಾದ ಕುರಿ ಒಂಟಿಯಾಗಿ ಹುಟ್ಟಿತು. ಆಡಿನ ಶರೀರದಲ್ಲಿ ಬಹು ಕಾಲ ಉಳಿದ ಮೇಧಾ ಶಕ್ತಿ ಮತ್ತೆ ಬತ್ತದ ನೆತ್ತರಲ್ಲಿ ಸೇರಿಕೊಂಡಿತು. ಆದುದರಿಂದ ಯಜ್ಞದಲ್ಲಿ ಹೋಮಿಸಲಿಕ್ಕೆ ಅಕ್ಕಿಯ ಅನ್ನವೇ ಉತ್ತಮವಾದ ವಸ್ತು. ಅದರೊಡನೆ ತುಪ್ಪ ಸೇರಿಸಿದರೆ ಅದು ಮತ್ತಷ್ಟು ಪರಿಶುದ್ಧವಾಗುವುದು. ಆಡಿನ ಶರೀರದಲ್ಲಿ ಮೇಧಾಶಕ್ತಿ ಹೆಚ್ಚುಕಾಲ ಸೇರಿಕೊಂಡಿದ್ದುದರಿಂದ ಆಡನ್ನೇ ಯಜ್ಞದಲ್ಲಿ ಬಲಿಕೊಡಬೇಕೆಂದೂ ಕೆಲವರು ಅಭಿಪ್ರಾಯ ಪಡುತ್ತಾರೆ. ಹೇಗಿದ್ದರೂ ಮನುಷ್ಯ ಬಲಿ ಎಷ್ಟಕ್ಕೂ ಕೂಡದು" ಎಂದು ಇಂದ್ರನು ಯಜ್ಞದ ವಿಷಯವಾಗಿ ಅಭಿಪ್ರಾಯಪಟ್ಟನು.

ಆ ಮೇಲೆ ಶುನಶ್ಶೇಫನು ಸೋಮದಿಂದ ಅಂಜಸವಪಾನಕವನ್ನು ತಯಾರಿಸಿ ಅನ್ನ ತುಪ್ಪದೊಡನೆ ದೇವತೆಗಳಿಗೆ ಅರ್ಪಿಸಿದನು. ಇದರಿಂದ ದೇವತೆಗಳು ತೃಪ್ತರಾಗಿ ಅವನನ್ನು ಆಶೀರ್ವದಿಸಿ ಹೊರಟುಹೋದರು. ವಿಶ್ವಾಮಿತ್ರನು ತನಗೆ ನೂರು ಮಂದಿ ಮಕ್ಕಳಿದ್ದರೂ ಶುನಶ್ಶೇಫನನ್ನು ತನ್ನ ಮಗನನ್ನಾಗಿ ಸ್ವೀಕರಿಸಿದನು. ಶುನಶ್ಶೇಫನನ್ನು ದೇವತೆಗಳು ಆಶೀರ್ವದಿಸಿದುದನ್ನು ಕಂಡು, ವಿಶ್ವಾಮಿತ್ರನು ಮಗನನ್ನಾಗಿ ಸ್ವೀಕರಿಸಿದುದನ್ನು ನೋಡಿ ಅಜೀಗರ್ತನು ಅವನು ತನ್ನ ಪಾಲಿಗೆ ಬರಬೇಕೆಂದನು. ಆಗ ಶುನಶ್ಶೇಫನು "ನಾನು ಬೇಡವೆಂದು ನೀನು ನನ್ನನ್ನು ಮಾರಿಬಿಟ್ಟೆ. ಈಗ ನಿನ್ನ ಮಗನಾಗಲಾರೆ. ನನ್ನನ್ನು ಉಳಿಸಿದವನು, ಸ್ವೀಕರಿಸಿದವನು ವಿಶ್ವಾಮಿತ್ರನು. ಇನ್ನು ಮುಂದೆ ಅವನೇ ನನ್ನ ತಂದೆ. ಹಣಗಾಗಿ ನೀನೂ ಮೂನ್ನೂರು ದನಗಳನ್ನು ತೆಗೆದುಕೊಂಡಾಗಿದೆ. ಇನ್ನು ನನ್ನ ಸುದ್ದಿ ಬೇಡ" ಎಂದು ಕಳೆದು ಬಿಟ್ಟನು.

ಆಗ ಅಜೀಗರ್ತನು ವಿಶ್ವಾಮಿತ್ರನ ಕಡೆಗೆ ನೋಡಿ, "ನೀನು ಸಾಮಾನ್ಯನಲ್ಲ, ಕ್ಷತ್ರಿಯನಾಗಿದ್ದವನು. ಹಟಸಾಧಿಸಿ ಬ್ರಾಹ್ಮಣತ್ವವನ್ನು ಪಡೆದೆ. ಈಗ ಬ್ರಾಹ್ಮಣ ಕುಮಾರನನ್ನು ಮಗನನ್ನಾಗಿ ಸ್ವೀಕರಿಸಿದೆ. ಬ್ರಾಹ್ಮಣರ ಜ್ಞಾನವನ್ನೂ ಕ್ಷತ್ರಿಯರ ಉತ್ಸಾಹವನ್ನೂ ಒಂದುಗೊಳಿಸಲು ನೋಡುವೆ

ಶತ್ರುಗಳು ಭರತರನ್ನು ಸೋಲಿಸಹೋಗುವಾಗ ಆ ಭರತರು ಓಡಿ ತಪ್ಪಿಸಿಕೊಳ್ಳಲು ಅನುಕೂಲವಾಗುವಂತೆ ಶತದ್ರುನದಿ ದಾರಿಕೊಡುವಂತೆ ಮಾಡಿದೆ. ಇದೇ ಹರಿಶ್ಚಂದ್ರ ಮಹಾರಾಜನ ತಂದೆ ತ್ರಿಶಂಕುವನ್ನು ದೇವತೆಗಳು ಸ್ವರ್ಗದಿಂದ ಹೊರತಳ್ಳಿದಾಗ, ಆ ತ್ರಿಶಂಕು ಮಹಾರಾಜನು ಭೂಮಿಗೆ ಬೀಳದಂತೆ ತಡೆದು ಆಕಾಶಮಧ್ಯದಲ್ಲೇ ನಿಲ್ಲುವಂತೆ ಮಾಡಿದೆ. ಅವನಿಂದು ಒಂದು ನಕ್ಷತ್ರವಾಗಿ ಆಕಾಶದಲ್ಲಿ ಮಿನುಗುತ್ತಿರುವನು. ನೀನೇನೋ ನನ್ನ ಮಗ ಶುನಃಶ್ಯೇಫನನ್ನು ಮಗನಾಗಿ ಸ್ವೀಕರಿಸಿದೆ. ಆದರೆ, ನಿನ್ನ ಮಕ್ಕಳು ಅದಕ್ಕೆ ಒಪ್ಪುವರೆಂದು ಹೇಗೆ ನಂಬಬಹುದು?" ಎಂದು ಪ್ರಶ್ನೆಹಾಕಿದನು.

"ಹೌದು, ನೀನು ಕೇಳಿದ ಪ್ರಶ್ನೆ ಸರಿಯಾದುದು! ಅದನ್ನು ಈಗಲೇ ನಿಶ್ಚಯಿಸಿಬಿಡುವೆ" ಎಂದು ಹೇಳಿ, ಅವನ ನೂರು ಮಂದಿ ಮಕ್ಕಳನ್ನೂ ಬಳಿಗೆ ಕರೆದನು. ಶುನಃಶ್ಯೇಫನನ್ನು ನಿಮಗೆಲ್ಲರಿಗೂ ಹಿರಿಯನಾಗಿ ಸ್ವೀಕರಿಸಿರಿ" ಎಂದು ಹೇಳಿದನು. ಆಗ ಆ ನೂರರಲ್ಲಿ ಮೊದಲ ಐವತ್ತು ಮಕ್ಕಳು, "ಅದು ಸಾಧ್ಯವಿಲ್ಲ" ಎಂದು ಅಲ್ಲಗಳೆದರು. ಮರುಚ್ಛಂದಸನೇ ಮುಖ್ಯವಾಗಿ ಉಳ್ಳ ಐವತ್ತು ಮಕ್ಕಳು ಶುನಃಶ್ಯೇಫನನ್ನು ತಮ್ಮ ಹಿರಿಯ ಅಣ್ಣನನ್ನಾಗಿ ಸ್ವೀಕರಿಸಿದರು. ವಿಶ್ವಾಮಿತ್ರನು ಶುನಃಶ್ಯೇಫನಿಗೆ ದೇವರಾತ ಎಂದರೆ "ದೇವತೆಗಳು ಕೊಟ್ಟವನು" ಎಂದು ಹೆಸರಿಟ್ಟನು. ಮತ್ತೆ ತನ್ನ ಮಾತು ಕೇಳದ ಆ ಐವತ್ತು ಮಂದಿ ಮಕ್ಕಳನ್ನು ಉತ್ತರದೇಶದಿಂದ, ದಕ್ಷಿಣದೇಶಕ್ಕೆ ಅಟ್ಟಿಬಿಟ್ಟನು. ಆ ಮಕ್ಕಳ ಸಂತತಿಯವರೇ ಶಬರ, ಪುಲಿಂದ ಮೊದಲಾದ ಹೆಸರುಗಳಿಂದ ಕಾಡಾಡಿಗಳಾಗಿ ಜೀವಿಸತೊಡಗಿದರು.



ವಿ. ಸೂ: 'ಒಂದಾಣೆ ಮಾಲೆ' ಪುಸ್ತಕಗಳನ್ನು ಕೊಂಡುಕೊಂಡ ಕೂಡಲೇ ಸರಿಗೆ ತೆಗೆದುಹಾಕಿ, ದಾರದಿಂದ ಹೊಲಿದು ಇಟ್ಟುಕೊಳ್ಳಿರಿ.

ಅತ್ಯುತ್ತಮ, ಮನೋರಂಜಕ ಹಾಗು ಬೋಧಪ್ರದ ಪುಸ್ತಕಗಳು ಮಾತ್ರ 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುತ್ತಿವೆ.

●

ಯಾವ ವಯಸ್ಸಿನವರೂ ಯಾವ ತರದ ಆಕ್ಷೇಪವೂ ಇಲ್ಲದೆ ಓದುವಂಥ ಸಾಹಿತ್ಯ ಮಾತ್ರ 'ಒಂದಾಣೆ ಮಾಲೆ'ಯಿಂದ ದೊರೆಯುತ್ತಿದೆ. ಅಶ್ಲೀಲ ಎಂಬ ಅಂಶವೇ ಈ ಮಾಲೆಯ ಪ್ರಕಟಣೆಗಳಲ್ಲಿರುವುದಿಲ್ಲ.

●

ಒಂದಾಣೆಗೆ, ಪ್ರತಿಯೊಂದು ಶನಿವಾರ ಒಂದೊಂದು ಹೊಸ ಪುಸ್ತಕವನ್ನು—ವರುಷಕ್ಕೆ ಐವತ್ತೆರಡು ಪುಸ್ತಕಗಳನ್ನು—ಕೊಡುವ ಈ ಯೋಜನೆಯು ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದಲ್ಲೇ ಹೊಸದು.

●

ಪ್ರತಿಯೋರ್ವ ವಿದ್ಯಾರ್ಥಿಯೂ ಅವಶ್ಯ ಓದುವಂತೆ, ಪ್ರತಿಯೋರ್ವ ಗೃಹಸ್ಥನೂ— ಪ್ರತಿಯೋರ್ವ ಗೃಹಿಣಿಯೂ ಓದುವಂತೆ—'ಒಂದಾಣೆ ಮಾಲೆ'ಯು ಶುದ್ಧತೆಯ ದೃಷ್ಟಿಯಿಂದಲೂ, ಉಪಯುಕ್ತತೆಯ ದೃಷ್ಟಿಯಿಂದಲೂ, ಸೌಲಭ್ಯದ ದೃಷ್ಟಿಯಿಂದಲೂ ಸರ್ವಾನುಕೂಲವೆ ಇದೆ.

●

ವಿ. ಸೂ:—'ಒಂದಾಣೆ ಮಾಲೆ'ಯ ಪುಸ್ತಕಗಳನ್ನು ಕೊಂಡುಕೊಳ್ಳುತ್ತಲೇ, ಸರಿಗೆ ತೆಗೆದುಹಾಕಿ ನೂಲಿನಿಂದ ಹೊಲಿದು ಇಟ್ಟುಕೊಳ್ಳಿ.

[೭ನೇ ಪುಟದಿಂದ]

ಕಥೆಗಳು; ೯೧ ಕೆಲವು ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪಥಿ-ಚಿಕಿತ್ಸಾಸಾರ. ೯೪ ಯಕ್ಷಗಾನ ನಾಟಕದ ಪರಂಪರೆ; ೯೫ ಪುನರುಜ್ಜೀವನ (ಏಕಾಂಕ ನಾಟಕ); ೯೬ ಪ್ರಥಮ ಚಿಕಿತ್ಸೆಯ ಕೈಪಿಡಿ; ೯೭ ಹಸ್ತರೇಖಾ ವಿಜ್ಞಾನ; ೯೮ ಸ್ವಾತಂತ್ರ್ಯ; ೯೯ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ; ೧೦೦ ಭಕ್ತ ಕುಚೇಲ; ೧೦೧ ಉತ್ತರನ ಪೌರುಷ; ೧೦೨ ಕುಮಾರ; ೧೦೩ ಕೇರಳ ಜ್ಯೋತಿಷ ೧೦೪ ಒಗಟುಗಳ ಗೊಂಚಲು. ೧೦೫ ಊರ-ಔಷಧಿಗಳು; ೧೦೬ ಮದ್ವೆ ಅವಾಂತರ; ೧೦೭ ಜಗತ್ತಿನ ವಿಜ್ಞಾನಿಗಳು; ೧೦೮ ನಮ್ಮ ದೇಶ; ೧೦೯ ಗ್ರಾಮ ಸ್ವಾತಂತ್ರ್ಯ. ೧೧೦. ನಮ್ಮ ಕನ್ನಡನಾಡು ೧೧೧. ಭಕ್ತ ಧ್ರುವ (ಏಕಾಂಕ ನಾಟಕ); ೧೧೨. ಕರ್ನಾಟಕ ಕವಿಚರಿತ್ರೆ; ೧೧೩ ಬೇಡನ ಮಗಳು; ೧೧೪ ವಿವೇಕಾನಂದವಾಣಿ; ೧೧೫ ನಮ್ಮ ಆಹಾರ; ೧೧೬ ಗಾದೆಗಳು ಮತ್ತು ಜ್ಞಾನೋಕ್ತಿಗಳು; ೧೧೭ ಪುರಂದರದಾಸರು (ಏಕಾಂಕ ನಾಟಕ); ೧೧೮ ಮನುಷ್ಯ ಯಜ್ಞ.

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

Edited, Printed & Published by K. V. Shenoy
at the Prabhat Printers, Ltd., Mangalore.